# ಕರ್ನಾಟಕ ಇತಿಹಾಸ ಅಕಾದೆಮಿ (ರಿ), ಬೆಂಗಳೂರು

# ವಾರ್ಷಿಕ ವರದಿ-೧೯೮೭

ಅಕಾದೆಮಿಯು ೧೯೮೭ರ ಸಾಲಿನಲ್ಲಿ ನಡೆಸಿದ ವಿವಿಧ ಕಾರ್ಯಕ್ರಮಗಳ ವರದಿಯು ಈ ಕೆಳಗಿನಂತೆ ಇದೆ :

**ಪ್ರಥಮ ವಾರ್ಷಿಕ ಸಮ್ಮೇಳನ :** ೧೯೮೭ ಮೇ ೧೫, ೧೬ ಮತ್ತು ೧೭ ರಂದು ಬೆಂಗಳೂರಿನ ಯುವಜನ ಸೇವಾ ಮತ್ತು ಕ್ರೀಡಾ ನಿರ್ದೇಶನಾಲಯದ ಸಭಾಂಗಣದಲ್ಲಿ ಅಕಾದೆಮಿಯ ಪ್ರಥಮ ವಾರ್ಷಿಕ ಸಮ್ಮೇಳನವು ನೆರವೇರಿತು.

ದಿನಾಂಕ ೧೫-೫-೧೯೮೭ ಶುಕ್ರವಾರದಂದು ಸಂಜೆ ೫-೩೦ ಗಂಟೆಗೆ ಪ್ರೊ॥ ವಿ.ಕೆ. ಗೋಕಾಕ್ ಅವರು ಸಮ್ಮೇಳನವನ್ನು ಉದ್ಘಾಟಿಸಿದರು. ಶ್ರೀ ಡಿ. ವಿ. ಅರಸ್ ಅವರು ಸಮ್ಮೇಳನದ ವಿಶೇಷಸಂಚಿಕೆ 'ಇತಿಹಾಸ ದರ್ಶನ'ವನ್ನು ಬಿಡುಗಡೆಗೊಳಿಸಿದರು. ಸಮ್ಮೇಳನದ ಅಧ್ಯಕ್ಷ ಡಾ॥ ಎಂ. ಚಿದಾನಂದಮೂರ್ತಿ ಅವರು ಅಧ್ಯಕ್ಷ ಭಾಷಣ ಮಾಡಿದರು. ಸಭಾಧ್ಯಕ್ಷತೆ ವಹಿಸಿದ್ದವರು ಅಕಾದೆಮಿಯ ಅಧ್ಯಕ್ಷ ಡಾ॥ ಜಿ. ಎಸ್. ದೀಕ್ಷಿತ್ ಅವರು. ಗೋಷ್ಠಿಯಲ್ಲಿ 'ಕರ್ನಾಟಕ ಇತಿಹಾಸದಲ್ಲಿ ಆಗಬೇಕಾದ ಸಂಶೋಧನೆ' ಎಂಬ ವಿಷಯ ಕುರಿತು ದಿನಾಂಕ ೧೬-೫-೧೯೮೭ ಶನಿವಾರದಂದು ಮಧ್ಯಾಹ್ನ ೩-೦೦ ಗಂಟೆಗೆ ಸಮಾವೇಶಗೊಂಡ ವಿಶೇಷ ವಿಚಾರಗೋಷ್ಠಿಯಲ್ಲಿ ಡಾ॥ ಅ.ಸುಂದರ, ಡಾ॥ ಎ. ವಿ. ನರಸಿಂಹಮೂರ್ತಿ, ಡಾ॥ ಸೂರ್ಯನಾಥ ಕಾಮತ್, ಶ್ರೀ ಎಚ್. ಪಿ. ಶಶಿಧರಮೂರ್ತಿ ಮೊದಲಾದ ವಿದ್ವಾಂಸರು ಭಾಗವಹಿಸಿ ತಮ್ಮ ಪ್ರಬಂಧಗಳನ್ನು ಮಂಡಿಸಿದರು. ಡಾ॥ ಶ್ರೀನಿವಾಸ ಹಾವನೂರ ಅವರು ಅಧ್ಯಕ್ಷರಾಗಿದ್ದ ಈ ಗೋಷ್ಠಿಯನ್ನು ನಿರ್ವಹಿಸಿದವರು ಶ್ರೀಮತಿ ಕಮಲಾ ಸಂಪಳ್ಳಿ ಅವರು. ದಿನಾಂಕ ೧೭-೫-೧೯೮೭ ಭಾನುವಾರದಂದು ಸಂಜೆ ೫-೦೦ ಗಂಟೆಗೆ ಡಾ॥ ಕೆ. ವಿ. ರಮೇಶ್ ಅವರು 'ಕನ್ನಡಿಗ : ಒಂದು ಐತಿಹಾಸಿಕ ವ್ಯಕ್ತಿಚಿತ್ರ' ವಿಷಯ ಕುರಿತು ವಿಶೇಷ ಉಪನ್ಯಾಸ ನೀಡಿದರು. ಡಾ॥ ಕೆ. ಎನ್. ಚಿಟ್ನೀಸ್ ಅವರು ಅಧ್ಯಕ್ಷತೆ ವಹಿಸಿದ್ದು, ಶ್ರೀ ಎಚ್. ಎಸ್. ಗೋಪಾಲರಾವ್ ಅವರು ಈ ಕಾರ್ಯಕ್ರಮವನ್ನು ನಿರ್ವಹಿಸಿದರು.

ಸಮ್ಮೇಳನದಲ್ಲಿ ಕರ್ನಾಟಕ ವಿವಿಧ ಜಿಲ್ಲೆಗಳು ಹಾಗೂ ಹೊರರಾಜ್ಯಗಳಿಂದ ಆಗಮಿಸಿದ್ದ ಸುಮಾರು ೫೦ ಮಂದಿ ಹಿರಿಯ ಹಾಗೂ ಯುವ ವಿದ್ವಾಂಸರು ಚರಿತ್ರೆ ಹಾಗೂ ಸಾಹಿತ್ಯ ಸಂಶೋಧನೆ ಕುರಿತು ವಿದ್ವತ್ಪೂರ್ಣ ಪ್ರಬಂಧಗಳನ್ನು ಮಂಡಿಸಿದರು.

ಇದೇ ಸಂದರ್ಭದಲ್ಲಿ ಅಕಾದೆಮಿಯ ಸರ್ವಸದಸ್ಯರ ಸಭೆ ನಡೆದು ಈ ಸಭೆಯ ಅಧ್ಯಕ್ಷತೆಯನ್ನು ಅಕಾದೆಮಿಯ ಉಪಾಧ್ಯಕ್ಷ ಶ್ರೀ ಎಂ. ಜಿ. ನಾಗರಾಜ್ ಅವರು ವಹಿಸಿದ್ದರು.

**ಉಪನ್ಯಾಸ ಕಾರ್ಯಕ್ರಮಗಳು :** ೧೯೮೭ರ ಸಾಲಿನಲ್ಲಿ ಬೆಂಗಳೂರು ನಗರದ ವಿವಿಧ ಬಡಾವಣೆಗಳಲ್ಲಿ ನಡೆದ ಉಪನ್ಯಾಸ ಕಾರ್ಯಕ್ರಮಗಳ ವಿವರಗಳು ಇಂತಿವೆ :

೧. ದಿನಾಂಕ ೨೨–೧–೧೯೮೭ ಗುರುವಾರ ಸಂಜೆ ೬–೦೦ ಗಂಟೆ; ಉಪನ್ಯಾಸಕರು : ಪ್ರೊ॥ ಎಚ್. ಎಂ. ಮರುಳಸಿದ್ದಯ್ಯ; ವಿಷಯ : ಸಮಾಜಕಾರ್ಯದ ಬೆಳವಣಿಗೆಯ ಹಂತಗಳು; ಅಧ್ಯಕ್ಷರು : ಡಾ॥ ಎಸ್. ವಿ. ದೇಶಿಕಾ ಚಾರ್; ಸ್ಥಳ : ಸಮಾಜ ಸೇವಾ ಇಲಾಖೆ, ಸೆಂಟ್ರಲ್ ಕಾಲೇಜ್.

೨. ದಿನಾಂಕ ೬-೩-೧೯೮೭ ಶುಕ್ರವಾರ ಸಂಜೆ ೬–೦೦ ಗಂಟೆ; ಉಪನ್ಯಾಸಕರು : ಶ್ರೀ ಎನ್. ಪಿ. ಶಂಕರ ನಾರಾಯಣರಾವ್; ವಿಷಯ : ಸಾಂಸ್ಕೃತಿಕ ಮಾನವಶಾಸ್ತ್ರ ಮತ್ತು ಇತಿಹಾಸ; ಅಧ್ಯಕ್ಷರು : ಶ್ರೀ ಎಂ. ಜಿ. ನಾಗರಾಜ್; ಸ್ಥಳ : ಕೇಂದ್ರೀಯ ಪ್ರೌಢಶಾಲೆ, ಜಿಲ್ಲಾ ಕಚೇರಿ ರಸ್ತೆ.

೩. ದಿನಾಂಕ ೨೯–೬–೧೯೮೭ ಸೋಮವಾರ ಸಂಜೆ ೬–೧೫ ಗಂಟೆ; ಉಪನ್ಯಾಸಕರು : ಶ್ರೀ ಸೇತುಮಾಧವ ರಾವ್ ಪಗಡಿ; ವಿಷಯ : ಮಧ್ಯಕಾಲೀನ ಕರ್ನಾಟಕದ ಆಡಳಿತ ವಿಭಾಗಗಳು; ಅಧ್ಯಕ್ಷರು : ಡಾ॥ ಎಸ್. ವಿ. ದೇಶಿಕಾಚಾರ್; ಸ್ಥಳ : ಗೋಖಲೆ ಇನ್ಸ್‌ಟಿಟ್ಯೂಟ್, ನರಸಿಂಹರಾಜ ಕಾಲನಿ.

೪. ದಿನಾಂಕ ೩೧–೭–೧೯೮೭ ಶುಕ್ರವಾರ ಸಂಜೆ ೬–೧೫ ಗಂಟೆ; ಉಪನ್ಯಾಸಕರು : ಪ್ರೊ॥ ರಂ. ಶ್ರೀ. ಮುಗಳಿ; ವಿಷಯ : ಪ್ರಸಿದ್ಧ ಇತಿಹಾಸಕಾರ ದಿ|| ನಾ. ಶ್ರೀ. ರಾಜಪುರೋಹಿತರು; ಅಧ್ಯಕ್ಷರು : ಪ್ರೊ॥ ಎಂ. ವಿ. ಸೀತಾ ರಾಮಯ್ಯ; ಸ್ಥಳ : ವಿದ್ಯಾವರ್ಧಕ ಸಂಘ ಪದವಿಪೂರ್ವ ಕಾಲೇಜು, ರಾಜಾಜಿನಗರ.

೫. ದಿನಾಂಕ ೧–೯–೧೯೮೭ ಮಂಗಳವಾರ ಸಂಜೆ ೬–೦೦ ಗಂಟೆ; ಉಪನ್ಯಾಸಕರು : ಡಾ॥ ವಸುಂಧರಾ ಫಿಲಿಯೋಜಾ; ವಿಷಯ : ಹಂಪೆಯ ಸ್ಮಾರಕಗಳು; ಅಧ್ಯಕ್ಷರು : ಡಾ॥ ಜಿ. ಎಸ್. ದೀಕ್ಷಿತ್; ಸ್ಥಳ : ಮಿಥಿಕ್ ಸೊಸಾಯಿಟಿ, ನೃಪತುಂಗರಸ್ತೆ, (ಸಹಯೋಗ : ಮಿಥಿಕ್ ಸೊಸಾಯಿಟಿ).

**ಪದವಿಪೂರ್ವ ಇತಿಹಾಸ ಶಿಕ್ಷಕರಿಗೆ ಕಾರ್ಯಾಗಾರ :** ಪದವಿಪೂರ್ವ ಶಿಕ್ಷಣದ ಇತಿಹಾಸ ಪಠ್ಯಕ್ರಮದ ಬಗೆಗೆ ಶಿಕ್ಷಕರಿಗೆ ನಾಲ್ಕು ದಿನಗಳ ಕಾರ್ಯಾಗಾರವೊಂದನ್ನು ದಿನಾಂಕ ೮–೧೧–೧೯೮೭ ರಿಂದ ೧೧–೧೧–೧೯೮೭ರವರೆಗೆ ಬೆಂಗಳೂರು ಸೆಂಟ್ರಲ್ ಕಾಲೇಜಿನ ಸೆನೆಟ್ ಹಾಲ್‌ನಲ್ಲಿ ನಡೆಸಲಾಯಿತು. ಇದು ಮುಖ್ಯವಾಗಿ ಕರ್ನಾಟಕ ಪದವಿಪೂರ್ವ ಶಿಕ್ಷಣ ಮಂಡಲಿಯ ಸಹಯೋಗದೊಡನೆ ನಡೆಯಿತು. ದಿನಾಂಕ ೮–೧೧–೧೯೮೭ ಭಾನುವಾರದಂದು ಅಪರಾಹ್ನ ೪–೦೦ ಗಂಟೆಗೆ ಈ ಕಾರ್ಯಾಗಾರವನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರಾದ ಶ್ರೀಮತಿ ಮಾಲತಿದಾಸ್ ಅವರು ಉದ್ಘಾಟಿಸಿದರು. ಅಕಾದೆಮಿಯ ಅಧ್ಯಕ್ಷ ಡಾ॥ ಜಿ. ಎಸ್. ದೀಕ್ಷಿತ್ ಪ್ರಾಸ್ತಾವಿಕ ಭಾಷಣ ಮಾಡಿದರು. ಡಾ॥ ಸೂರ್ಯನಾಥ್ ಕಾಮತ್ ಅವರು ಕಾರ್ಯಾಗಾರದ ರೂಪ–ರೇಖೆಗಳನ್ನು ವಿವರಿಸಿದರು. ಈ ಸಮಾರಂಭದ ಅಧ್ಯಕ್ಷತೆ ವಹಿಸಿದ್ದವರು ಪ್ರೊ॥ ಎಸ್. ಸತ್ಯನಾರಾಯಣರಾವ್ ಅವರು. ಪ್ರತಿದಿನ ಸಂಜೆ ೫–೩೦ ಗಂಟೆಗೆ ಉಪನ್ಯಾಸ ಕಾರ್ಯಕ್ರಮಗಳು ಆರಂಭಗೊಳ್ಳುತ್ತಿದ್ದು, ಮೇಲ್ಕಂಡ ದಿನಾಂಕಗಳಂದು ಪದವಿಪೂರ್ವ ತರಗತಿಯ ಚರಿತ್ರೆಯ ಪಠ್ಯಕ್ರಮ ವನ್ನಾಧರಿಸಿದ ವಿಷಯಗಳನ್ನು ಕುರಿತು ಉಪನ್ಯಾಸ ನೀಡಿದವರೆಂದರೆ ಪ್ರೊ॥ ಎಸ್. ಸತ್ಯನಾರಾಯಣರಾವ್, ಪ್ರೊ॥ ಎಸ್. ಎಮ್. ಎ. ಹಮೀದ್, ಪ್ರೊ॥ ಬಿ. ಜೆ. ಮ್ಯಾಥ್ಯೂಸ್, ಡಾ॥ ಬಿ. ಕೆ. ಗುರುರಾಜರಾವ್, ಡಾ॥ ಸೂರ್ಯನಾಥ ಕಾಮತ್, ಡಾ॥ ಹೆಚ್. ವಿ. ಶ್ರೀನಿವಾಸಮೂರ್ತಿ, ಶ್ರೀ ಎಸ್. ಪಿ. ಕಡಿವಾಳ ಹಾಗೂ ಡಾ॥ ಎ. ವಿ. ವೆಂಕಟರತ್ನಂ ಅವರುಗಳು. ನಾಲ್ಕು ದಿನ ನಡೆದ ಈ ಕಾರ್ಯಾಗಾರದಲ್ಲಿ ಬೆಂಗಳೂರಿನ ಹೊರಗಿನಿಂದ ಬಂದ ೩೦ ಶಿಕ್ಷಕರೂ ಸೇರಿದಂತೆ ಒಟ್ಟು ೧೫೦ ಶಿಕ್ಷಕರು ಪಾಲುಗೊಂಡಿದ್ದರು. ಮಾದರಿಪ್ರಶ್ನೆಗಳ ಪಟ್ಟಿ ಹಾಗೂ ಆಧಾರಗ್ರಂಥಗಳ ಪಟ್ಟಿಯನ್ನು ಈ ಶಿಕ್ಷಕರಿಗೆ ಒದಗಿಸಲಾಯಿತು. ಪಠ್ಯಕ್ರಮದ ಬಗ್ಗೆ ಸಾಕಷ್ಟು ಚರ್ಚೆ ನಡೆದು, ಶಿಕ್ಷಕರ ಸಂಶಯಗಳ ನಿವಾರಣೆ ಹಾಗೂ ಅವರ ಸಲಹೆಗಳ ಸಂಕಲನ ಮಾಡಲಾಯಿತು. ಪದವಿಪೂರ್ವ ಶಿಕ್ಷಣ ಮಂಡಲಿಗೆ ಕೃತಜ್ಞತೆ ಸಲ್ಲಿಸಲಾಯಿತು.

**ಕಾರ್ಯಕಾರಿ ಸಮಿತಿ ಸಭೆಗಳು :** ೧೯೮೭ರಲ್ಲಿ ಒಟ್ಟು ೭ ಬಾರಿ ಅಕಾದೆಮಿಯ ಕಾರ್ಯಕಾರಿ ಸಮಿತಿ ಸಭೆಗಳು ಬೆಂಗಳೂರಿನಲ್ಲಿ ಸೇರಿದ್ದು, ಅಕಾದೆಮಿಯ ವಿವಿಧ ಕಾರ್ಯಕ್ರಮಗಳನ್ನು ಕೈಗೊಳ್ಳಲು ನೆರವಾಗಿವೆ. ಕಲಬುರ್ಗಿ ವಿಭಾಗ ದಿಂದ ಡಾ॥ ಎಲ್. ಆರ್. ಕುಲಕರ್ಣಿ ಮತ್ತು ಮೈಸೂರಿನಿಂದ ಶ್ರೀ ಮಾಧವ ನಾ. ಕಟ್ಟಿ ಅವರುಗಳನ್ನು ಸಮಿತಿಗೆ ಸರ್ವ ಸಮ್ಮತಿಯೊಡನೆ ನಾಮಕರಣ ಮಾಡಲಾಯಿತು.

**ಸದಸ್ಯರ ಸಂಖ್ಯೆ :** ಈ ವಾರ್ಷಿಕ ಸಭೆಯ ಹೊತ್ತಿಗೆ ಅಕಾದೆಮಿಯಲ್ಲಿ ಆಜೀವ ಸದಸ್ಯರು ೭೮ (ಎಪ್ಪತ್ತೆಂಟು) ಮತ್ತು ಸಾಮಾನ್ಯ ಸದಸ್ಯರು ೧೬೪ (ಒಂದುನೂರ ಅರವತ್ತನಾಲ್ಕು) ಜನ ಇದ್ದಾರೆ.

**ಕೃತಜ್ಞತೆ :** ೧೯೮೭ರ ಸಾಲಿನಲ್ಲಿ ಅಕಾದೆಮಿಯ ಕಾರ್ಯಕ್ರಮಗಳಿಗೆ ಸೂಕ್ತ ರೀತಿಯಲ್ಲಿ ಸಲಹೆ–ಸಹಾಯ ಗಳನ್ನು ನೀಡಿ ಸಹಕರಿಸಿದ ದೆಹಲಿಯ ಭಾರತೀಯ ಇತಿಹಾಸ ಸಂಶೋಧನ ಮಂಡಲಿ (ICHR), ಬೆಂಗಳೂರಿನ ಮಿಥಿಕ್ ಸೊಸಾಯಿಟಿ ಮತ್ತು ಕರ್ನಾಟಕ ಪದವಿಪೂರ್ವ ಶಿಕ್ಷಣ ಮಂಡಲಿ ಇನ್ನಿತರ ಸಂಸ್ಥೆ ಹಾಗೂ ಮಹನೀಯರುಗಳಿಗೆ ಅಕಾದೆಮಿಯು ಕೃತಜ್ಞವಾಗಿರುತ್ತದೆ.